# ಕರ್ನಾಟಕ ವಿಧಾನ ಪರಿಷತ್ತು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಸ್.ಎಲ್. ಧರ್ಮೇಗೌಡ**
**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1233**
**ಉತ್ತರಿಸಬೇಕಾದ ದಿನಾಂಕ : 21-12-2018**

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಸಹಕಾರ ಸಂಸ್ಥೆಗಳು ಲೆಕ್ಕಪರಿಶೋಧಕರ ಸಂಭಾವನೆ ದರವನ್ನು ಸಂಧಾನದ ಮೂಲಕ ತೀರ್ಮಾನಿಸಿಕೊಳ್ಳಲು ಸ್ವತಂತ್ರರಾಗಿರುತ್ತಾರೆಂಬ ಷರತ್ತನ್ನು ರದ್ದುಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| (ಆ) | ಹಾಗಿದ್ದಲ್ಲಿ, ಯಾವ ನಿಯಮಾವಳಿಗಳ ಅನ್ವಯ ಹಾಗೂ ಯಾವ ದಿನಾಂಕದಿಂದ ರದ್ದುಪಡಿಸಲಾಗಿದೆ; ರದ್ದುಪಡಿಸಲು ಕಾರಣಗಳೇನು; (ಪೂರ್ಣ ಮಾಹಿತಿಯನ್ನು ನೀಡುವುದು) | ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ 1960ರ ನಿಯಮ 30 ರನ್ವಯ ಯಾವುದೇ ಸಹಕಾರ ಸಂಘದ ಯಾವುದೇ ವರ್ಷದ ಲೆಕ್ಕಪತ್ರಗಳನ್ನು ಪರಿಶೋಧಿಸುವ ಲೆಕ್ಕಪರಿಶೋಧಕನಿಗೆ ಅಥವಾ ಲೆಕ್ಕಪರಿಶೋಧನಾ ಫರ್ಮಿಗೆ ಪಾವತಿಸತಕ್ಕ ಸಂಭಾವನೆಯನ್ನು ಕಾಲಕಾಲಕ್ಕೆ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ನೀಡುವ ಮಾರ್ಗಸೂಚಿಗಳನ್ನು ಅನುಸರಿಸಿ ದುಡಿಯುವ ಬಂಡವಾಳ ಮತ್ತು ವಹಿವಾಟಿನ ಆಧಾರದ ಮೇಲೆ ಸಂಘದ ಸಾಮಾನ್ಯ ನಿಕಾಯವು ನಿರ್ಧರಿಸತಕ್ಕದ್ದು ಎಂದಿದ್ದು, ಇದರನ್ವಯ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಮಾರ್ಗಸೂಚಿಗಳನ್ನು ಹೊರಡಿಸಿರುತ್ತಾರೆ. ಸರ್ಕಾರದ ಪತ್ರ ಸಂಖ್ಯೆ:ಸಿಒ/92/ಸಿಎಲ್ಎಂ/2016, ದಿನಾಂಕ: 19-12-2016 ರಿಂದ **ಪ್ರತಿಯೊಂದು ಸಹಕಾರ ಸಂಘವು ಲೆಕ್ಕಪರಿಶೋಧಕರ / ಲೆಕ್ಕಪರಿಶೋಧನಾ ಸಂಸ್ಥೆಯೊಂದಿಗೆ ಸಂಭಾವನೆ ದರವನ್ನು ಸಂಧಾನ ಮೂಲಕ ತೀರ್ಮಾನಿಸಿಕೊಳ್ಳಲು ಸ್ವತಂತ್ರರಾಗಿರುತ್ತಾರೆ** ಎಂಬ ವಾಕ್ಯವನ್ನು ಮಾರ್ಗಸೂಚಿಗಳಿಂದ ಈ ಕೆಳಕಾಣಿಸಿದ ಕಾರಣಗಳಿಗಾಗಿ ರದ್ದುಪಡಿಸಲಾಗಿರುತ್ತದೆ.<br>1) ಸಂಭಾವನೆ ದರವನ್ನು ಸಂಧಾನದ ಮೂಲಕ ತೀರ್ಮಾನಿಸುವುದು ಎಂಬುದಾಗಿ ಇರುವುದರಿಂದ ಸನ್ನದು ಲೆಕ್ಕಪರಿಶೋಧಕರು ಸ್ವತಂತ್ರವಾಗಿ ಮತ್ತು ಮುಲಾಜಿಗೆ ಒಳಗಾಗದೇ ಲೆಕ್ಕಪರಿಶೋಧನೆ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ ಹಾಗೂ ಸನ್ನದು ಲೆಕ್ಕಪರಿಶೋಧಕರುಗಳಲ್ಲಿ ಲೆಕ್ಕಪರಿಶೋಧನೆಗಾಗಿ ಅವರೊಳಗೆ ಅನಾರೋಗ್ಯಕರ ಸ್ಪರ್ಧೆ ಉಂಟಾಗುತ್ತಿದೆ.<br>2) ಈ ರೀತಿಯಾದ ಸ್ಪರ್ಧೆಯಿಂದಾಗಿ ಲೆಕ್ಕಪರಿಶೋಧನೆಯಲ್ಲಿ ಹಾಗೂ ಲೆಕ್ಕಪರಿಶೋಧನಾ ವರದಿಗಳಲ್ಲಿ ಗುಣಮಟ್ಟವು ಕಡಿಮೆಯಾಗುತ್ತಿದೆ.<br>3) ಮೇಲಿನ ವಾಕ್ಯ ಕೈಬಿಡುವುದರಿಂದ ಇಲಾಖಾ ಲೆಕ್ಕಪರಿಶೋಧನಾ ಸಿಬ್ಬಂದಿಯವರು ಲೆಕ್ಕಪರಿಶೋಧನಾ ಶುಲ್ಕ ತಗಾದೆ ಮಾಡುವ ರೀತ್ಯಾ ಸರಿಸಮಾನವಾಗಿ ಸನ್ನದು ಲೆಕ್ಕಪರಿಶೋಧಕರಿಗೂ ಸಹ ಅವಕಾಶ ಕಲ್ಪಿಸಿದಂತಾಗಿರುತ್ತದೆ. ತಪ್ಪಿದಲ್ಲಿ ಇಲಾಖೆ ನಿರ್ವಹಿಸುವ ಲೆಕ್ಕಪರಿಶೋಧನೆಗೆ ಸಂಬಂಧಿಸಿದಂತೆ ಮತ್ತು ಸನ್ನದು ಲೆಕ್ಕಪರಿಶೋಧಕರು ನಿರ್ವಹಿಸುವ ಲೆಕ್ಕಪರಿಶೋಧನೆಗೆ ಲೆಕ್ಕಪರಿಶೋದನಾ ಶುಲ್ಕ ವಿಧಿಸುವಲ್ಲಿ ತಾರತಮ್ಯವೆಸಗಿದಂತಾಗುತ್ತದೆ.<br>4) ಲೆಕ್ಕಪರಿಶೋಧನಾ ಶುಲ್ಕದ ದರಕ್ಕೆ ಸಂಬಂಧಿಸಿದಂತೆ ಸರ್ಕಾರದ ಆದೇಶ ದಿನಾಂಕ: 02-12-2005 ರ ರೀತ್ಯಾ ರೂ. 100/- ದುಡಿಯುವ ಬಂಡವಾಳ ಅಥವಾ ಒಟ್ಟು ವ್ಯವಹಾರಕ್ಕೆ ಸಂಬಂಧಿಸಿದಂತೆ ರೂ. 0.20 ಪೈಸೆ ದರ ವಿಧಿಸುವ ಕ್ರಮವನ್ನು ಪರಿಷ್ಕರಿಸಿ ದಿನಾಂಕ: 21-09-2013 ರ ಮಾರ್ಗಸೂಚಿಗಳನ್ವಯ ರೂ. 0.10 ಪೈಸೆಗೆ ಇಳಿಸಲಾಗಿದೆ.<br>ಈ ಮೇಲಿನ ವಾಸ್ತುವಂಶಗಳ ಹಿನ್ನಲೆಯಲ್ಲಿ ಸಂಭಾವನೆ ದರವನ್ನು ಸಂಧಾನದ ಮೂಲಕ ತೀರ್ಮಾನಿಸುವ ವಾಕ್ಯವನ್ನು ಮಾರ್ಗಸೂಚಿಗಳಿಂದ ಕೈಬಿಡಲಾಗಿರುತ್ತದೆ. |

| | | |
|---|---|---|
| (ಇ) | ಈ ಷರತ್ತನ್ನು ರದ್ದುಪಡಿಸಿರುವುದರಿಂದ ಆಡಿಟ್ ಶುಲ್ಕವನ್ನು ಕಡಿಮೆ ಪಾವತಿಸುತ್ತಿದ್ದ ಸಹಕಾರ ಸಂಸ್ಥೆಗಳು ವಿನಾಕಾರಣ ಹೆಚ್ಚಿಗೆ ಪಾವತಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ರದ್ದುಪಡಿರುವುದರಿಂದ ಸರ್ಕಾರಕ್ಕಿರುವ ಅನುಕೂಲಗಳೇನು ಮತ್ತು ಅನಾನುಕೂಲಗಳೇನು (ಪೂರ್ಣ ಮಾಹಿತಿ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಸದರಿ ಷರತ್ತನ್ನು ರದ್ದುಪಡಿಸಿರುವುದರಿಂದ ಈ ಕೆಳಕಂಡ ಅನುಕೂಲಗಳಾಗುವವು.<br>1) ಲೆಕ್ಕಪರಿಶೋಧನೆಯು ಸ್ವತಂತ್ರವಾಗಿ ಮತ್ತು ನಿಷ್ಪಕ್ಷಪಾತವಾಗಿ ನಿರ್ವಹಿಸಲ್ಪಟ್ಟಿರುತ್ತದೆ.<br>2) ಲೆಕ್ಕಪರಿಶೋಧಕರು ಯಾವುದೇ ಮುಲಾಜಿಗೆ ಒಳಗಾಗದೇ ಲೆಕ್ಕಪರಿಶೋಧನಾ ಗುಣಮಟ್ಟವನ್ನು ಕಾಪಾಡಲು ಸಾಧ್ಯವಾಗುತ್ತದೆ.<br>3) ಷರತ್ತು ರದ್ದತಿಯಿಂದ ಸನ್ನದು ಲೆಕ್ಕಪರಿಶೋಧಕರಿಗೂ ಸಹ ಇಲಾಖಾ ಲೆಕ್ಕ ಪರಿಶೋಧಕರಂತೆ ಸರಿಸಮಾನವಾಗಿ ಅವಕಾಶ ಕಲ್ಪಿಸಿದಂತಾಗಿರುತ್ತದೆ.<br>4) ಲೆಕ್ಕಪರಿಶೋಧನಾ ಶುಲ್ಕ ದರಕ್ಕೆ ಸಂಬಂಧಿಸಿದಂತೆ ಸರ್ಕಾರದ ಆದೇಶ ದಿನಾಂಕ: 02-12-2005 ರ ರೀತ್ಯಾ ರೂ. 100/- ದುಡಿಯುವ ಬಂಡವಾಳ ಅಥವಾ ಒಟ್ಟು ವ್ಯವಹಾರಕ್ಕೆ ಸಂಬಂಧಿಸಿದಂತೆ ರೂ. 0.20 ಪೈಸೆ ವಿಧಿಸುವ ಕ್ರಮವನ್ನು ಪರಿಷ್ಕರಿಸಿ ದಿನಾಂಕ: 21-09-2013 ರ ಮಾರ್ಗಸೂಚಿಗಳನ್ವಯ ರೂ. 0.10 ಪೈಸೆಗೆ ಇಳಿಸಲಾಗಿದ್ದು, ಷರತ್ತು ರದ್ದತಿಯಿಂದ ಸಹಕಾರ ಸಂಘಗಳಿಗೆ ನ್ಯಾಯಸಮ್ಮತವಾಗಿ ಪಾವತಿಸಲು ಅನುಕೂಲವಾಗಿರುತ್ತದೆ.<br>ಸದರಿ ಷರತ್ತನ್ನು ರದ್ದುಪಡಿಸದೇ ಇದ್ದಲ್ಲಿ ಈ ಕೆಳಕಂಡ ಅನಾನುಕೂಲಗಳು ಆಗುತ್ತವೆ.<br>1) ಲೆಕ್ಕಪರಿಶೋಧನೆಯನ್ನು ಸ್ವತಂತ್ರವಾಗಿ ಮತ್ತು ನಿಷ್ಪಕ್ಷಪಾತವಾಗಿ ನಿರ್ವಹಿಸಲು ಸಾಧ್ಯವಾಗುವುದಿಲ್ಲ.<br>2) ಲೆಕ್ಕಪರಿಶೋಧಕರು ಸಂಧಾನಕ್ಕೆ ಒಳಗಾಗುವುದರಿಂದ ಲೆಕ್ಕಪರಿಶೋಧನಾ ಗುಣಮಟ್ಟವನ್ನು ಕಾಪಾಡಲು ಸಾಧ್ಯವಾಗುವುದಿಲ್ಲ.<br>3) ಇಲಾಖೆ ನಿರ್ವಹಿಸುವ ಲೆಕ್ಕಪರಿಶೋಧನೆಗೆ ಸಂಬಂಧಿಸಿದಂತೆ ಮತ್ತು ಸನ್ನದು ಲೆಕ್ಕಪರಿಶೋಧಕರು ನಿರ್ವಹಿಸುವ ಲೆಕ್ಕಪರಿಶೋಧನೆಗೆ ಲೆಕ್ಕಪರಿಶೋಧನಾ ಶುಲ್ಕ ವಿಧಿಸುವಲ್ಲಿ ತಾರತಮ್ಯವೆಸಗಿದಂತಾಗುತ್ತದೆ.<br>4) ಸಣ್ಣ ಪ್ರಮಾಣದ ದುಡಿಯುವ ಬಂಡವಾಳ ಅಥವಾ ಒಟ್ಟು ವ್ಯವಹಾರದ ಹೊಂದಿರುವ ಸಹಕಾರ ಸಂಘಗಳಿಗೆ ಮಾರ್ಗಸೂಚಿಗಳನ್ವಯ ರೂ. 100/- ದುಡಿಯುವ ಬಂಡವಾಳ ಅಥವಾ ಒಟ್ಟು ವ್ಯವಹಾರಕ್ಕೆ ಸಂಬಂಧಿಸಿದಂತೆ ರೂ. 0.20 ಪೈಸೆ ಯಿಂದ ರೂ. 0.10 ಪೈಸೆಗೆ ಇಳಿಸಲಾಗಿರುತ್ತದೆ. ದರ ಇಳಿಸದೇ ಇದ್ದಲ್ಲಿ ಹೆಚ್ಚಿನ ಆರ್ಥಿಕ ಹೊರೆಯಾಗುತ್ತಿತ್ತು. |
| (ಈ) | ಸಹಕಾರ ಸಂಸ್ಥೆಗಳು ಲೆಕ್ಕಪರಿಶೋಧಕರ ಸಂಭಾವನೆ ದರವನ್ನು ಸಂಧಾನದ ಮೂಲಕ ತೀರ್ಮಾನಿಸಿಕೊಳ್ಳಲು ಸ್ವತಂತ್ರರಾಗಿರುತ್ತಾರೆ ಎಂಬುದಾಗಿ ಈ ಹಿಂದಿನ ಷರತ್ತಿನಂತ ಜಾರಿಗೆ ತರಲು ಸರ್ಕಾರ ಸೂಕ್ತ ಕ್ರಮ ಕೈಗೊಳ್ಳುವುದೇ; ಹಾಗಿದ್ದಲ್ಲಿ ಯಾವಾಗ ಕ್ರಮ ಕೈಗೊಳ್ಳಲಾಗುವುದು. ಈ ಕುರಿತು ಸರ್ಕಾರದ ನಿಲುವೇನು? (ಮಾಹಿತಿ ನೀಡುವುದು) | ಮೇಲೆ ವಿವರಿಸಿದ ಕಾರಣಗಳಿಂದ ಲೆಕ್ಕಪರಿಶೋಧಕರ ಸಂಭಾವನೆ ದರವನ್ನು ಸಂಧಾನದ ಮೂಲಕ ತೀರ್ಮಾನಿಸಿಕೊಳ್ಳಲು ಸ್ವತಂತ್ರ ರಾಗಿರುತ್ತಾರೆ ಎಂಬ ಷರತ್ತನ್ನು ಜಾರಿಗೆ ತರಲು ಸರ್ಕಾರವು ಉದ್ದೇಶಿಸಿರುವುದಿಲ್ಲ. |

ಸಿಓ 106 ಸಿಎಲ್ಎಂ 2018

(ಬಂಡೆಪ್ಪ ಕಾಶೆಂಪೂರ)

ಸಹಕಾರ ಸಚಿವರು